# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೫೦<br>Volume 150 | ಬೆಂಗಳೂರು, ಗುರುವಾರ, ಏಪ್ರಿಲ್ ೯, ೨೦೧೫ (ಚೈತ್ರ ೧೯, ಶಕ ವರ್ಷ ೧೯೩೭)<br>Bengaluru, Thursday, April 9, 2015 (Chaithra 19, Shaka Varsha 1937) | ಸಂಚಿಕೆ ೧೫<br>Issue 15 |
|---|---|---|


## ಭಾಗ ೫
## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು

### ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್‌ರವರ ಕಛೇರಿ ಮೈಸೂರು ಜಿಲ್ಲೆ, ಮೈಸೂರು

**ಅಧಿಸೂಚನೆ**

**ಸಂಖ್ಯೆ: ಇಎಕ್ಸ್‌ಇ/ಎಂವೈಎಸ್/ವಾಚಾ/ನೇಮಕಾತಿ/21/14-15, ದಿನಾಂಕ: 28-02-2015**

ಸರ್ಕಾರಿ ಆದೇಶ ಸಂಖ್ಯೆ : ಆಇ 107 ಇಪಿಎಸ್ 2014 ದಿನಾಂಕ : 27-10-2014 ರಂತೆ ಅಬಕಾರಿ ಇಲಾಖೆಯಲ್ಲಿ ಖಾಲಿ ಇರುವ ವಾಹನ ಚಾಲಕರ ಒಟ್ಟು 182 ಹುದ್ದೆ (ವೇತನ ಶ್ರೇಣಿ- 11,600-21,00) ಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡಲು ಆರ್ಥಿಕ ಸಹಮತಿ ನೀಡಿದ್ದು, ಈ ಪೈಕಿ ಮೈಸೂರು ಜಿಲ್ಲೆಗೆ ಆರು (06) ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡಲು ಅಬಕಾರಿ ಆಯುಕ್ತರು, ಬೆಂಗಳೂರು ಇವರು ಪತ್ರ ಸಂ : ಇಸಿಇ/ 11/ ವಾಚಾ/ ಎಪಿಟಿ/ 2013, ದಿನಾಂಕ : 17-11-2014 ರಲ್ಲಿ ಆದೇಶಿಸಲಾಗಿರುವುದರಿಂದ, ಆರು ವಾಹನ ಚಾಲಕರ ಹುದ್ದೆಗಳ ವರ್ಗಾವಾರು ವಿಂಗಡನೆ ಮಾಡಲಾದ ವಿವರ ಈ ಕೆಳಕಂಡಂತಿರುತ್ತದೆ.

| ಕ್ರ.ಸಂ | ವರ್ಗ | ಮೀಸಲು |
|---|---|---|
| 1 | ಪ್ರವರ್ಗ -2 (ಎ) | ಪುರುಷ / ಮಹಿಳೆ |
| 2 | ಸಾಮಾನ್ಯ ವರ್ಗ | ಪುರುಷ / ಮಹಿಳೆ |
| 3 | ಪರಿಶಿಷ್ಟ ಜಾತಿ | ಮಹಿಳಾ ಅಭ್ಯರ್ಥಿ |

| ಕ್ರ.ಸಂ | ವರ್ಗ | ಮೀಸಲು |
|---|---|---|
| 4 | ಸಾಮಾನ್ಯ ವರ್ಗ | ಮಹಿಳಾ ಅಭ್ಯರ್ಥಿ |
| 5 | ಪ್ರವರ್ಗ -2 (ಬಿ) | ಪುರುಷ / ಮಹಿಳೆ |
| 6 | ಸಾಮಾನ್ಯ ವರ್ಗ | ಗ್ರಾಮೀಣ ಅಭ್ಯರ್ಥಿ |

ಮಹಿಳಾ ಮೀಸಲಾತಿಯಡಿ ಅರ್ಹ ಮಹಿಳಾ ಅಭ್ಯರ್ಥಿಗಳು ಲಭ್ಯವಿಲ್ಲದಿದ್ದಲ್ಲಿ ಅದೇ ಮೀಸಲಾತಿಯಡಿ ಪುರುಷ ಅಭ್ಯರ್ಥಿಯನ್ನು ಪರಿಗಣಿಸಲಾಗುವುದು

**ವಾಹನ ಚಾಲಕರ ಹುದ್ದೆಗೆ ಅರ್ಜಿ ಸಲ್ಲಿಸಲು ಅಭ್ಯರ್ಥಿಗಳು ಈ ಕೆಳಕಂಡಂತೆ ಷರತ್ತುಗಳನ್ನು ಪೂರೈಸಬೇಕು.**

1. **ಶೈಕ್ಷಣಿಕ ವಿದ್ಯಾರ್ಹತೆ-**
   - 7 ನೇ ತರಗತಿ ಉತ್ತೀರ್ಣರಾಗಿರಬೇಕು. 7 ನೇ ತರಗತಿಯ ಅಂಕಗಳ ಆಧಾರದ ಮೇಲೆಯೇ ನೇಮಕಾತಿ ಮಾಡಲಾಗುವುದು.

2. **ಅರ್ಹತಾ ಷರತ್ತು:**

   ಅಭ್ಯರ್ಥಿಯು ಚಾಲ್ತಿಯಲ್ಲಿರುವ ಲಘು ಮೋಟಾರು ವಾಹನ (LMV) ಚಾಲನ ಪರವಾನಗಿಯನ್ನು ಹಾಗೂ ಪ್ರಥಮ ಚಿಕಿತ್ಸಾ ಪ್ರಮಾಣ ಪತ್ರ ಹೊಂದಿರಬೇಕು.

3. **ವಯೋಮಿತಿ:**

   ಅರ್ಜಿಯನ್ನು ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅಭ್ಯರ್ಥಿಯು 18 ವರ್ಷ ಪೂರೈಸಿರತಕ್ಕದ್ದು ಹಾಗೂ ಗರಿಷ್ಠ ವಯೋಮಿತಿಯನ್ನು ಈ ಕೆಳಕಂಡಂತೆ ಮೀರಿರಬಾರದು.

| | |
|---|---|
| ಸಾಮಾನ್ಯ ಅರ್ಹತೆ | 35 ವರ್ಷ |
| ಪ್ರವರ್ಗ-2ಎ,2ಬಿ, 3ಎ, 3ಬಿ | 38 ವರ್ಷ |
| ಪ.ಜಾ/ಪ.ಪಂ/ಪ್ರ-1 | 40 ವರ್ಷ |

ಜನ್ಮ ದಿನಾಂಕಕ್ಕಾಗಿ **ವರ್ಗಾವಣೆ ಪ್ರಮಾಣ ಪತ್ರ (ಟಿ.ಸಿ)** ಅಥವ ಎಸ್.ಎಸ್.ಎಲ್.ಸಿ ಅಂಕಪಟ್ಟಿಯಲ್ಲಿ (ಲಭ್ಯವಿದ್ದಲ್ಲಿ) ನಮೂದಿಸಿರುವಂತೆ ಜನ್ಮ ದಿನಾಂಕವನ್ನು ಮಾತ್ರ ಒಪ್ಪಿಕೊಳ್ಳಲಾಗುವುದು. ಇತರೇ ಯಾವುದೇ ದಾಖಲೆಗಳನ್ನು ಪರಿಗಣಿಸಲಾಗುವುದಿಲ್ಲ.

4. **ಜಾತಿ/ಮೀಸಲಾತಿ ಪ್ರಮಾಣ ಪತ್ರಗಳು:**

ಮೀಸಲಾತಿ ಕೋರ ಬಯಸುವ ಅಭ್ಯರ್ಥಿಗಳು ಈ ಕೆಳಗೆ ನಮೂದಿಸಿರುವ ನಮೂನೆಗಳಲ್ಲಿಯೇ ಮೀಸಲಾತಿ ಪ್ರಮಾಣ ಪತ್ರಗಳನ್ನು ಅರ್ಜಿ ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕದೊಳಗೆ ಕಡ್ಡಾಯವಾಗಿ ಪಡೆದಿಟ್ಟುಕೊಂಡಿರತಕ್ಕದ್ದು:

ಅ) ಪರಿಶಿಷ್ಟ ಜಾತಿಗೆ ಸೇರಿದ ಅಭ್ಯರ್ಥಿಗಳು: ನಮೂನೆ'ಡಿ'

ಆ) ಪ್ರವರ್ಗ–2ಎ ಮತ್ತು 2–ಬಿ ಮೀಸಲಾತಿಗೆ ಸೇರಿದ ಅಭ್ಯರ್ಥಿಗಳು:– ನಮೂನೆ 'ಎಫ್'

ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಚಾಲ್ತಿಯಲ್ಲಿರುವ ಮೀಸಲಾತಿ ಪ್ರಮಾಣ ಪತ್ರವನ್ನು ಸಂಬಂಧಿತ ತಹಶೀಲ್ದಾರ್‌ರವರಿಂದ ಪಡೆದಿಟ್ಟುಕೊಂಡಿರತಕ್ಕದ್ದು. ಅರ್ಜಿಯೊಂದಿಗೆ ಮೀಸಲಾತಿ ಪ್ರಮಾಣ ಪತ್ರಗಳ ಸ್ವ–ದೃಢೀಕೃತ ಪ್ರತಿಗಳನ್ನು ಸಲ್ಲಿಸಬೇಕು, ದಾಖಲಾತಿ ಪರಿಶೀಲನೆ ಸಮಯದಲ್ಲಿ ಈ ಪ್ರಮಾಣ ಪತ್ರಗಳ ಮೂಲ ಪ್ರತಿಯನ್ನು ತಪ್ಪದೇ ಹಾಜರುಪಡಿಸತಕ್ಕದ್ದು, ತಪ್ಪಿದ್ದಲ್ಲಿ ಅಂತಹ ಅಭ್ಯರ್ಥಿಗಳ ಮೀಸಲಾತಿಯನ್ನು ರದ್ದುಪಡಿಸಿ ಅವರ ಅಭ್ಯರ್ಥಿತನವನ್ನು ಸಾಮಾನ್ಯ ಅರ್ಹತೆಯಡಿಯಲ್ಲಿ ಅರ್ಹರಾದಲ್ಲಿ ಮಾತ್ರ ಪರಿಗಣಿಸಲಾಗುವುದು. ಈ ಪ್ರಮಾಣಪತ್ರಗಳ ನಮೂನೆಯನ್ನು ಅನುಬಂಧದಲ್ಲಿ ತೋರಿಸಲಾಗಿದೆ. ಈ ನಮೂನೆಗಳನ್ನು ಹೊರತುಪಡಿಸಿ ಇತರೇ ನಮೂನೆಗಳಲ್ಲಿ ಪಡೆಯಲಾದ ಮೀಸಲಾತಿ ಪ್ರಮಾಣ ಪತ್ರಗಳನ್ನು ತಿರಸ್ಕರಿಸಲಾಗುವುದು.

5. **ಗ್ರಾಮೀಣ ಅಭ್ಯರ್ಥಿ:**

ಸರ್ಕಾರಿ ಆದೇಶ ಸಂಖ್ಯೆ ಸಿಆಸುಇ 08 ಸೇನೆನಿ 2001 ದಿನಾಂಕ: 13–02–2001 ರನ್ವಯ ಗ್ರಾಮೀಣ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು ಪ್ರಸ್ತುತ ಚಾಲ್ತಿಯಲ್ಲಿರುವ ನಿಯಮಗಳ ರೀತ್ಯ 1 ರಿಂದ 10ನೇ ತರಗತಿಯವರೆಗೆ ಗ್ರಾಮೀಣ ಮೀಸಲಾತಿಗೆ ಒಳಪಡುವ ಪ್ರದೇಶಗಳಲ್ಲಿ ವ್ಯಾಸಂಗ ಮಾಡಿ ಉತ್ತೀರ್ಣರಾಗಿರುವವರು ಈ ಮೀಸಲಾತಿಯನ್ನು ಪಡೆಯಲು ಅರ್ಹರು. ಗ್ರಾಮೀಣ ಅಭ್ಯರ್ಥಿಯೆಂದು ಮೀಸಲಾತಿ ಪಡೆಯಲು ಇಚ್ಛಿಸಿರುವ ಸಾಮಾನ್ಯ ಅರ್ಹತೆಯ ಅಭ್ಯರ್ಥಿಗಳು 1 ರಿಂದ 7ನೇ ತರಗತಿಯವರೆಗೆ ಗ್ರಾಮೀಣ ಮೀಸಲಾತಿಗೆ ಒಳಪಡುವ ಪ್ರದೇಶಗಳಲ್ಲಿ ವ್ಯಾಸಂಗ ಮಾಡಿ ಉತ್ತೀರ್ಣರಾಗಿರುವ ಬಗ್ಗೆ **ನಮೂನೆ–2** ರಲ್ಲಿ ಸಂಬಂಧಪಟ್ಟ ಕ್ಷೇತ್ರ ಶಿಕ್ಷಣಾಧಿಕಾರಿಯವರ ಮೇಲು ರುಜುವಿನೊಂದಿಗೆ ಹಾಗೂ ಈ ಪ್ರಮಾಣ ಪತ್ರವಲ್ಲದೆ ಮೇಲುಸ್ಥರಕ್ಕೆ ಸೇರಿಲ್ಲದಿರುವ ಬಗ್ಗೆ ನಮೂನೆ–01 ರಲ್ಲಿ ಪ್ರಮಾಣ ಪತ್ರವನ್ನು ಕಡ್ಡಾಯವಾಗಿ ಸಂಬಂಧಿತ ತಹಶೀಲ್ದಾರ್‌ರವರಿಂದ ಪಡೆಯತಕ್ಕದ್ದು. ನಮೂನೆ–2 ಪ್ರಮಾಣ ಪತ್ರದ ನಮೂನೆಯನ್ನು ಅನುಬಂಧದಲ್ಲಿ ತೋರಿಸಲಾಗಿದೆ.

6. **ದೈಹಿಕ ದಾರ್ಢ್ಯತೆ:**

ಅರ್ಜಿ ಸಲ್ಲಿಸಿದ ಅಭ್ಯರ್ಥಿಗಳಲ್ಲಿ 7ನೇ ತರಗತಿಯ ಅಂಕಗಳನ್ನು ಪರಿಗಣಿಸಿ 1:20 ರ ಅನುಪಾತದಲ್ಲಿ ಅಭ್ಯರ್ಥಿಗಳನ್ನು ಆಯ್ದು, ದೈಹಿಕ ದಾರ್ಢ್ಯತೆ ಪರೀಕ್ಷಿಸಲಾಗುವುದು.

| ಕ್ರ.ಸಂ | ಪುರುಷರಿಗೆ | ಮಹಿಳೆಯರಿಗೆ |
|---|---|---|
| 1 | ಎತ್ತರ– 163 ಸೆ.ಮಿ | ಎತ್ತರ–157 ಸೆ.ಮಿ |
| 2 | ಕನಿಷ್ಠ ಎದೆ ಸುತ್ತಳತೆ: 81 ಸೆ.ಮಿ ಪೂರ್ತಿ ವಿಸ್ತರಿಸಿದಾಗ ಕನಿಷ್ಠ 5 ಸೆ.ಮಿ ಹಿಗ್ಗಬೇಕು | ತೂಕ: 49.9 ಕೆ.ಜಿ |
| 3 | ದೃಷ್ಠಿ ಸಾಮರ್ಥ್ಯ– 6/9 ಅಥವಾ 6/12 | ದೃಷ್ಠಿ ಸಾಮರ್ಥ್ಯ– 6/9 ಅಥವಾ 6/12 |

ಅಸಿಸ್ಟಂಟ್ ಸರ್ಜನ್ ಗ್ರೇಡ್–1 ಕ್ಕಿಂತ ಕಡಿಮೆ ದರ್ಜೆಯಿರದ ವೈದ್ಯಾಧಿಕಾರಿಯಿಂದ ಮೇಲ್ಕಂಡ ದೈಹಿಕ ದಾರ್ಢ್ಯತೆಯ ಅಂಶಗಳಿಗೆ 'ದೇಹದಾರ್ಢ್ಯ ಪ್ರಮಾಣ ಪತ್ರ' ವನ್ನು ಪಡೆದು ಅರ್ಜಿಯೊಂದಿಗೆ ಸ್ವ–ದೃಢೀಕೃತ ನಕಲನ್ನು ಸಲ್ಲಿಸುವುದು.

7. **ಅರ್ಜಿ ನಮೂನೆ ಮತ್ತು ಶುಲ್ಕ:**

ಅರ್ಜಿ ನಮೂನೆಗಳನ್ನು 'ಅಬಕಾರಿ ಉಪ ಆಯುಕ್ತರ ಕಛೇರಿ, ಸಂಖ್ಯೆ: 1715–16, 1ನೇ ಮಹಡಿ, 3ನೇ ಕ್ರಾಸ್, ಅನಿಕೇತನ ರಸ್ತೆ, ಕುವೆಂಪುನಗರ, ಮೈಸೂರು – 570023' ಇಲ್ಲಿ ಕಛೇರಿಯ ವೇಳೆಯಲ್ಲಿ ದಿನಾಂಕ: 02–03–2015 ರಿಂದ ವಿತರಿಸಲಾಗುವುದು. **ಭರ್ತಿ ಮಾಡಿದ ಅರ್ಜಿಗಳನ್ನು ಸ್ವೀಕರಿಸುವ ಕಡೇ ದಿನಾಂಕ: 10–04–2015.**

ಎಸ್.ಸಿ., ಎಸ್.ಟಿ ಮತ್ತು ಹಿಂದುಳಿದ ವರ್ಗಗಳ ಪ್ರವ–I ಹೊರತುಪಡಿಸಿ ಇತರ ಅಭ್ಯರ್ಥಿಗಳು 'ಜಿಲ್ಲಾಧಿಕಾರಿಗಳು, ಮೈಸೂರು ಜಿಲ್ಲೆ' ಇವರ ಹೆಸರಿನಲ್ಲಿ ರೂ. 5.00 ರ ಭಾರತೀಯ ಅಂಚೆ ಆದೇಶ (Crossed Indian postal order) ಸಲ್ಲಿಸಬೇಕು.

ಅರ್ಜಿಯಲ್ಲಿ ಪಾಸ್ ಪೋರ್ಟ್ ಅಳತೆಯ ( 45 ಮಿಮಿ ಉದ್ದ, 35 ಮಿಮಿ ಅಗಲ) ಅಭ್ಯರ್ಥಿಯ ಇತ್ತೀಚಿನ ಕಲರ್ ಭಾವಚಿತ್ರವನ್ನು (ಫೋಟೋ) ಅಂಟಿಸತಕ್ಕದ್ದು, ಭಾವಚಿತ್ರದ ಕೆಳಗೆ ಸಹಿಗಾಗಿ ನೀಡಿರುವ ಜಾಗದಲ್ಲಿ ಮಾತ್ರ ಸಹಿ ಮಾಡಬೇಕು. (ಯಾವುದೇ ಕಾರಣಕ್ಕೂ ಭಾವಚಿತ್ರದ ಮೇಲೆ ಸಹಿ ಮಾಡಬಾರದು). ಸಹಿ ಮಾಡದ ಹಾಗೂ ಅಪೂರ್ಣ ಮಾಹಿತಿಯಿರುವ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

8. **ನಡತೆ ಪ್ರಮಾಣ ಪತ್ರ:**

ಅಭ್ಯರ್ಥಿಯು ಸ್ಥಳೀಯ ಇಬ್ಬರು ಗಣ್ಯ ವ್ಯಕ್ತಿಗಳಿಂದ ನಡತೆ ಪ್ರಮಾಣ ಪತ್ರ ಪಡೆದು, ಸ್ವ–ದೃಢೀಕೃತ ಪ್ರತಿಯನ್ನು ಅರ್ಜಿಯೊಂದಿಗೆ ಸಲ್ಲಿಸತಕ್ಕದ್ದು.

ಒಬ್ಬ ಅಭ್ಯರ್ಥಿಯು ನಕಲಿ ವ್ಯಕ್ತಿಯಾಗಿರುವನೆಂದು ಅಥವಾ ಖೋಟಾ ದಸ್ತವೇಜು ಅಥವ ತಿದ್ದಲಾದ ದಸ್ತಾವೇಜುಗಳನ್ನು ಸಲ್ಲಿಸಿರುವನೆಂದು ಅಥವಾ ತಪ್ಪು ಅಥವಾ ಸುಳ್ಳು ಹೇಳಿಕೆ ನೀಡಿರುವನೆಂದು ಅಥವಾ ವಾಸ್ತವಿಕ ಮಾಹಿತಿಯನ್ನು ಮರೆಮಾಚಿರುವನೆಂದು ಕಂಡುಬಂದಲ್ಲಿ ಅವನು /ಅವಳು ಸ್ವತಃ ಕ್ರಿಮಿನಲ್ ವ್ಯವಹರಣೆಗಳಿಗೆ ಮತ್ತು ಶಿಸ್ತು ಕ್ರಮಕ್ಕೆ ಒಳಪಡುವುದಲ್ಲದೆ ಹುದ್ದೆಯ ಆಯ್ಕೆಯಿಂದ ಅಭ್ಯರ್ಥಿತ್ವವನ್ನು ರದ್ದುಪಡಿಸಲಾಗುವುದು.

ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್
ಮೈಸೂರು ಜಿಲ್ಲೆ, ಮೈಸೂರು.

PR. 96
SC. 10

## ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಹಾವೇರಿ

**ನೇಮಕಾತಿ ಅಧಿಸೂಚನೆ ಸಂಖ್ಯೆ : 01/2015, ದಿನಾಂಕಃ 06/03/2015.**

**ವಿಷಯಃ** ಶೀಘ್ರಲಿಪಿಗಾರ ಹುದ್ದೆಗಳ ನೇರ ನೇಮಕಾತಿ ಮಾಡಲು ಅಧಿಸೂಚನೆ ಹೊರಡಿಸುವ ಕುರಿತು.

**ಉಲ್ಲೇಖಃ** 1. ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದ ಪತ್ರ ಸಂಖ್ಯೆಃ ಎಲ್‌ಎಸಿ–2 205/2004, ದಿನಾಂಕಃ 17–06–2009.

2. ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದ ಪತ್ರ ಸಂಖ್ಯೆಃ ಎಲ್‌ಎಸಿ–2 36/2003, ದಿನಾಂಕಃ 23–06–2011.

3. ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದ ಪತ್ರ ಸಂಖ್ಯೆಃ ಎಲ್‌ಎಸಿ–2 128/2012, ದಿನಾಂಕಃ 14–09–2012.

4. ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದ ಪತ್ರ ಸಂಖ್ಯೆಃ ಎಲ್‌ಎಸಿ–2 128/2012, ದಿನಾಂಕಃ 21–01–2013.

ಹಾವೇರಿ ಜಿಲ್ಲೆಯ ಅಧೀನ ನ್ಯಾಯಾಲಯಗಳಲ್ಲಿ ಖಾಲಿ ಇರುವ "ಶೀಘ್ರಲಿಪಿಗಾರ" ಹುದ್ದೆಗಳಿಗೆ ನಿಗಧಿತ ನಮೂನೆಯಲ್ಲಿ ಅರ್ಜಿಗಳನ್ನು ಆಹ್ವಾನಿಸಿದ್ದು, ಇಚ್ಛೆಯುಳ್ಳ ಅಭ್ಯರ್ಥಿಗಳು ಎಲ್ಲ ಅಂಕಣಗಳನ್ನು ಭರ್ತಿ ಮಾಡಿ ಅರ್ಜಿಯ ಜೊತೆಗೆ ದಾಖಲಾತಿಗಳ ಸ್ವಯಂ ದೃಢೀಕೃತ ನಕಲುಗಳನ್ನು ಲಗತ್ತಿಸಿ, ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಹಾವೇರಿ, ಈ ವಿಳಾಸಕ್ಕೆ ನಿಗದಿತ ಅವಧಿಯೊಳಗಾಗಿ ಸಲ್ಲಿಸತಕ್ಕದ್ದು.

**ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕಃ 10/04/2015. ಸಾಯಂಕಾಲ 05–45 ಗಂಟೆಯವರೆಗೆ**

- **ಹುದ್ದೆಗಳ ಸಂಖ್ಯೆಃ 09**
- **ವರ್ಗೀಕರಣಃ–**

| ಮೀಸಲಾತಿ | ರೋಸ್ಟರ್ ಬಿಂದು | | ವರ್ಗೀಕರಣ | | | | | | | |
|---|---|---|---|---|---|---|---|---|---|---|
| | ನೇರ ಮೀಸಲಾತಿ | ಸಮತಳ ಮೀಸಲಾತಿ | ಇತರೆ | ಮಹಿಳೆ | ಗ್ರಾಮೀಣ | ಅಂಗವಿಕಲ | ಮಾಜಿ ಸೈನಿಕ | ಕನ್ನಡ ಮಾಧ್ಯಮ | ಯೋಜನಾ ನಿರಾಶ್ರಿತ | ಒಟ್ಟು |
| ಸಾಮಾನ್ಯ ಅಭ್ಯರ್ಥಿ | 74 76 78 80 | 17 18 19 20 | 01 | 01 | – | – | 01 | – | 01 | **04** |
| ಪರಿಶಿಷ್ಟ ಜಾತಿ | 75 81 | 12 13 | – | 01 | 01 | – | – | – | – | **02** |
| ಪರಿಶಿಷ್ಟ ಪಂಗಡ | – | – | – | – | – | – | – | – | – | – |
| ಪ್ರವರ್ಗ–1 | 79 | 04 | – | – | – | 01 | – | – | – | **01** |
| ಪ್ರವರ್ಗ–2ಎ | 77 | 12 | – | 01 | – | – | – | – | – | **01** |
| ಪ್ರವರ್ಗ–2ಬಿ | – | – | – | – | – | – | – | – | – | – |
| ಪ್ರವರ್ಗ–3ಎ | 73 | 03 | – | – | 01 | – | – | – | – | **01** |
| ಪ್ರವರ್ಗ–3ಬಿ | – | – | – | – | – | – | – | – | – | – |
| ಒಟ್ಟು | | | **01** | **03** | **02** | **01** | **01** | – | **01** | **09** |

- **ವೇತನ ಶ್ರೇಣಿ**

14550–350–15600–400–17200–450–19000–500–21000–600–24600–700–26700/– ಮತ್ತು ಇತರೆ ಭತ್ಯೆಗಳು

- **ಕನಿಷ್ಠ ಶೈಕ್ಷಣಿಕ ವಿದ್ಯಾರ್ಹತೆಃ–**

1. ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯು ನಡೆಸುವ ಎಸ್‌ಎಸ್‌ಎಲ್‌ಸಿ ಪರೀಕ್ಷೆಯಲ್ಲಿ ಉತ್ತೀರ್ಣತೆ ಅಥವಾ ತತ್ಸಮಾನ ವಿದ್ಯಾರ್ಹತೆ.
2. ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯು ನಡೆಸುವ ಹಿರಿಯ ದರ್ಜೆಯ ಕನ್ನಡ ಮತ್ತು ಆಂಗ್ಲ ಶೀಘ್ರಲಿಪಿ ಮತ್ತು ಬೆರಳಚ್ಚು ಪರೀಕ್ಷೆಯಲ್ಲಿ ಉತ್ತೀರ್ಣತೆ ಅಥವಾ ತತ್ಸಮಾನ ವಿದ್ಯಾರ್ಹತೆ.
3. ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯು ನಡೆಸುವ ಹಿರಿಯ ಕನ್ನಡ ಮತ್ತು ಆಂಗ್ಲ ಭಾಷೆಗಳ ಶೀಘ್ರಲಿಪಿ ಮತ್ತು ಬೆರಳಚ್ಚು ಪರೀಕ್ಷೆಯಲ್ಲಿ ಉತ್ತೀರ್ಣತೆ ಅಥವಾ ತತ್ಸಮಾನ ವಿದ್ಯಾರ್ಹತೆ ಅಥವಾ ಡಿಪ್ಲೋಮಾ ಇನ್ ಕಮರ್ಷಿಯಲ್ ಪ್ರಾಕ್ಟೀಸ್‌ನಲ್ಲಿ ಕನ್ನಡ ಮತ್ತು ಆಂಗ್ಲ ಭಾಷೆಗಳ ಹಿರಿಯ ದರ್ಜೆ ಶೀರ್ಘಲಿಪಿ ಮತ್ತು ಬೆರಳಚ್ಚು ಪರೀಕ್ಷೆ ತೇರ್ಗಡೆ ಹೊಂದಿರಬೇಕು.

- **ವಯೋಮಿತಿಃ–**

ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅಭ್ಯರ್ಥಿಯು ಈ ಕೆಳಕಂಡ ವಯೋಮಿತಿಯನ್ನು ಹೊಂದಿರತಕ್ಕದ್ದು.

1. ಕನಿಷ್ಠ ವಯೋಮಿತಿ 18 ವರ್ಷ
2. ಗರಿಷ್ಠ ವಯೋಮಿತಿ – ಸಾಮಾನ್ಯ ವರ್ಗ – 35 ವರ್ಷ
   – ಪ್ರವರ್ಗ 2ಎ, 2ಬಿ, 3ಎ, 3ಬಿ – 38 ವರ್ಷ
   – ಪರಿಶಿಷ್ಟ ಜಾತಿ, ಪರಿಶಿಷ್ಟ, ಪಂಗಡ ಪ್ರವರ್ಗ 1– 40 ವರ್ಷ
3. ಸರ್ಕಾರಿ ಸೇವೆಯಲ್ಲಿರುವವರಿಗೆ, ವಿಧವೆಯರಿಗೆ, ಮಾಜಿ ಸೈನಿಕರಿಗೆ ಮತ್ತು ಅಂಗವಿಕಲರಿಗೆ ನಿಯಮಗಳ ಅನುಸಾರ ವಯೋಮಿತಿಯಲ್ಲಿ ಸಡಲಿಕೆ ನೀಡಲಾಗುವುದು.

- **ಆಯ್ಕೆ ವಿಧಾನಃ–**

1. ಅಭ್ಯರ್ಥಿಗಳ ಆಯ್ಕೆಯನ್ನು ಕರ್ನಾಟಕ ಅಧೀನ ನ್ಯಾಯಾಲಯಗಳು (ಲಿಪಿಕ ಮತ್ತು ಇತರೆ ಹುದ್ದೆಗಳು) (ನೇಮಕಾತಿ) ನಿಯಮಗಳು 1982 ಮತ್ತು ತಿದ್ದುಪಡಿ ನಿಯಮಗಳು 2007 ರಂತೆ ಮಾಡಲಾಗುವುದು. ಆಯ್ಕೆಯಾದ ಅಭ್ಯರ್ಥಿಗಳು ನೇಮಕಾತಿ ನಿಯಮಗಳಂತೆ ಎರಡು ವರ್ಷಗಳ ಕಾಲ ಪರಿವೀಕ್ಷಣಾ ಅವಧಿಯನ್ನು ಪೂರೈಸಬೇಕಾಗುವುದು ಮತ್ತು ನಿರ್ದಿಷ್ಟ ಪಡಿಸಿದ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಬೇಕಾಗುವುದು.

2. ಶೀಘ್ರಲಿಪಿಗಾರ ಹುದ್ದೆಗೆ ಒಂದು ನಿಮಿಷಕ್ಕೆ 120 ಶಬ್ದಗಳಂತೆ 5 ನಿಮಿಷಗಳ ಉಕ್ತ ಲೇಖನವನ್ನು ಕನ್ನಡ ಮತ್ತು ಆಂಗ್ಲ ಭಾಷೆಯಲ್ಲಿ ನೀಡಲಾಗುವುದು. ಅದನ್ನು ಲಿಪ್ಯಂತರಗೊಳಿಸಿ, ಬೆರಳಚ್ಚು ಮಾಡಲು 45 ನಿಮಿಷಗಳ ಕಾಲಾವಕಾಶ ನೀಡಲಾಗುವುದು. ಇದಕ್ಕೆ 100 ಗರಿಷ್ಠ ಅಂಕಗಳನ್ನು ನಿಗದಿಪಡಿಸಿದ್ದು, ಸಂದರ್ಶನಕ್ಕೆ ಅರ್ಹತೆ ಹೊಂದಲು ಕನಿಷ್ಠ 50 ಅಂಕಗಳನ್ನು ಪಡೆಯಬೇಕಾಗುವುದು. ಅಭ್ಯರ್ಥಿಯು ಎಸ್‌ಎಸ್‌ಎಲ್‌ಸಿ ಪರೀಕ್ಷೆಯಲ್ಲಿ, ಹಿರಿಯ ಕನ್ನಡ ಮತ್ತು ಆಂಗ್ಲ ಬೆರಳಚ್ಚು, ಶೀಘ್ರಲಿಪಿ ಪರೀಕ್ಷೆಗಳಲ್ಲಿ ಮತ್ತು ಈ ಪ್ರಾಧಿಕಾರ ನಡೆಸಲಾದ ಶೀಘ್ರಲಿಪಿ ಹಾಗೂ ಬೆರಳಚ್ಚು ಪಡೆದ ಅಂಕಗಳ ಸರಾಸರಿ ಆಧಾರದ ಮೇಲೆ ಒಂದು ಹುದ್ದೆಗೆ ಅನುಪಾತ 1:5 ರಂತೆ ಅಭ್ಯರ್ಥಿಗಳನ್ನು ಸಂದರ್ಶನಕ್ಕೆ ಕರೆಯಲಾಗುವುದು. ಅಭ್ಯರ್ಥಿಯು ಹುದ್ದೆಗೆ ನಿಗದಿಪಡಿಸಲಾದ ಕನಿಷ್ಟ ವಿದ್ಯಾರ್ಹತೆಯಲ್ಲಿ ಪಡೆದ ಅಂಕಗಳು, ಈ ಪ್ರಾಧಿಕಾರವು ನಡೆಸಲಾದ ಕನ್ನಡ ಮತ್ತು ಆಂಗ್ಲ ಶೀಘ್ರಲಿಪಿ ಹಾಗೂ ಬೆರಳಚ್ಚು ಪರೀಕ್ಷೆಯಲ್ಲಿ ಪಡೆದ ಅಂಕಗಳು ಮತ್ತು ಸಂದರ್ಶನದಲ್ಲಿ ಪಡೆದ ಅಂಕಗಳ ಆಧಾರದ ಮೇಲೆ ಅಭ್ಯರ್ಥಿಗಳನ್ನು ಆಯ್ಕೆಮಾಡಲಾಗುವುದು.

- **ಸೂಚನೆಗಳುಃ–**

1. ಅಭ್ಯರ್ಥಿಗಳು ಲಕೋಟೆಯ ಮೇಲೆ "ಶೀಘ್ರಲಿಪಿಗಾರರ ಹುದ್ದೆಗೆ" ಎಂದು ಕಡ್ಡಾಯವಾಗಿ ನಮೂದಿಸತಕ್ಕದ್ದು.
2. ಸರ್ಕಾರಿ ಸೇವೆಯಲ್ಲಿರುವ ಅಭ್ಯರ್ಥಿಗಳು ತಮ್ಮ ನೇಮಕಾತಿ ಪ್ರಾಧಿಕಾರದಿಂದ ನಿರಾಕ್ಷೇಪಣಾ ಪ್ರಮಾಣ ಪತ್ರವನ್ನು ಹಾಗೂ ಸೇವಾ ಪ್ರಮಾಣ ಪತ್ರವನ್ನು ಪಡೆದುಕೊಂಡು, ಅರ್ಜಿಯ ಜೊತೆಗೆ ಲಗತ್ತಿಸಿ, ಆ ಅರ್ಜಿಯನ್ನು ಸಮುಚಿತ ಮಾರ್ಗದ ಮುಖಾಂತರ ಸಲ್ಲಿಸತಕ್ಕದ್ದು.
3. ಅಭ್ಯರ್ಥಿಗಳು ನಿರ್ದಿಷ್ಟಪಡಿಸಿದ ಅರ್ಜಿ ನಮೂನೆಯಲ್ಲಿ ತಮ್ಮ ಇತ್ತೀಚಿನ ಪಾಸ್‌ಪೋರ್ಟ್ ಸೈಜ ಭಾವಚಿತ್ರವನ್ನು ಅಂಟಿಸಿ, ಅದರ ಜೊತೆಗೆ ಸ್ವ–ವಿಳಾಸವಿರುವ ಮತ್ತು 5 ರೂಪಾಯಿಗಳ ಅಂಚೆ ಚೀಟಿಯನ್ನು ಲಗತ್ತಿಸಿದ ಲಕೋಟೆಯೊಂದಿಗೆ ಸಲ್ಲಿಸಕ್ಕದ್ದು.
4. ಅಭ್ಯರ್ಥಿಗಳನ್ನು ನಿಗದಿಪಡಿಸಿದ ಕನಿಷ್ಟ ವಿದ್ಯಾರ್ಹತೆಯಲ್ಲಿ ಪಡೆದ ಅಂಕಗಳ ಆಧಾರದ ಮೇಲೆ ಅರ್ಹತಾ ಪರೀಕ್ಷೆಗೆ ಕರೆಯಬೇಕಾಗಿರುವುದರಿಂದ, ಅವರು ನಿಗದಿಪಡಿಸಿದ ಕನಿಷ್ಠ ವಿದ್ಯಾರ್ಹತೆಯನ್ನು ಹೊಂದಿದ ಬಗ್ಗೆ ಸ್ವಯಂ ದೃಢೀಕೃತ ಅಂಕಪಟ್ಟಿಗಳ ನಕಲುಗಳನ್ನು ಕಡ್ಡಾಯವಾಗಿ ಅರ್ಜಿಯ ಜೊತೆಗೆ ಲಗತ್ತಿಸತಕ್ಕದ್ದು, ಇಲ್ಲವಾದಲ್ಲಿ ಅಂತಹ ಅರ್ಜಿಗಳನ್ನು ತಿರಸ್ಕರಿಸಲಾಗುವುದು.
5. ಜನ್ಮ ದಿನಾಂಕವನ್ನು ದೃಢೀಕರಿಸಲು ಎಸ್‌ಎಸ್‌ಎಲ್‌ಸಿ ಅಂಕಪಟ್ಟಿ ಅಥವಾ ವರ್ಗಾವಣೆ ಪ್ರಮಾಣ ಪತ್ರದ ಸ್ವಯಂ ದೃಢೀಕೃತ ದಾಖಲೆಯನ್ನು ಕಡ್ಡಾಯವಾಗಿ ಲಗತ್ತಿಸತಕ್ಕದ್ದು.
6. ಮೀಸಲಾತಿಯನ್ನು ಕೋರಿ ಅರ್ಜಿಗಳನ್ನು ಸಲ್ಲಿಸುವ ಅಭ್ಯರ್ಥಿಗಳು ಸರಕಾರದಿಂದ ನಿಗದಿಪಡಿಸಿದ ಸಂಬಂಧಪಟ್ಟ ಪ್ರಾಧಿಕಾರಿಗಳಿಂದ ಪಡೆದ ಹಾಗೂ ಚಾಲ್ತಿಯಲ್ಲಿರುವ ಪ್ರಮಾಣ ಪತ್ರಗಳ ಸ್ವಯಂ ದೃಢಿಕೃತ ದಾಖಲೆಗಳನ್ನು ಕಡ್ಡಾಯವಾಗಿ ಲಗತ್ತಿಸತಕ್ಕದ್ದು.
7. ಒಂದು ವೇಳೆ ಅಧಿಸೂಚನೆಯಲ್ಲಿ ನಮೂದಿಸಿದ ವರ್ಗೀಕರಣಕ್ಕನುಸಾರವಾಗಿ ಅರ್ಹ ಅಭ್ಯರ್ಥಿಗಳು ಲಭ್ಯವಾಗದಿದ್ದಲ್ಲಿ ಆ ಸ್ಥಾನಗಳಿಗೆ ಅದೇ ವರ್ಗದ ಅರ್ಹ ಇತರ ಅಭ್ಯರ್ಥಿಗಳನ್ನು ಭರ್ತಿ ಮಾಡಿಕೊಳ್ಳಲಾಗುವುದು.
8. ಅರ್ಹತಾ ಪರೀಕ್ಷೆ ಮತ್ತು ಸಂದರ್ಶನಕ್ಕಾಗಿ ಆಹ್ವಾನಿಸಿದ ಅಭ್ಯರ್ಥಿಗಳು ತಮ್ಮ ಸ್ವಂತ ಖರ್ಚಿನಲ್ಲಿ ಹಾಜರಾಗತಕ್ಕದ್ದು.
9. ಅಪೂರ್ಣ ಮತ್ತು ಕಡ್ಡಾಯವಾಗಿ ಲಗತ್ತಿಸಬೇಕಾದ ದಾಖಲಾತಿಗಳನ್ನು ಲಗತ್ತಿಸಲಾರದ ಹಾಗೂ ಕೊನೆಯ ದಿನಾಂಕದ ನಂತರ ಬಂದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.
10. ಅರ್ಜಿಯನ್ನು ಸಲ್ಲಿಸಲು ನಿಗದಿಪಡಿಸಿದ ದಿನಾಂಕದಿಂದ 6 ತಿಂಗಳ ಒಳಗಿರುವ ಹಾಗೂ ಅರ್ಜಿದಾರರಿಗೆ ಸಂಬಂಧಿಕರಲ್ಲದ ಇಬ್ಬರು ಗಣ್ಯ ವ್ಯಕ್ತಿಗಳು ನೀಡಿರುವ ನಡತೆ ಪ್ರಮಾಣ ಪತ್ರಗಳನ್ನು ಸಲ್ಲಿಸತಕ್ಕದ್ದು.
11. ಅರ್ಜಿಯ ಜೊತೆ ಅಭ್ಯರ್ಥಿಯು ಅಭ್ಯಸಿಸಿದ ಶಾಲೆ / ವಿದ್ಯಾಲಯದಿಂದ ಪಡೆದ ಒಂದು ನಡತೆ ಪ್ರಮಾಣ ಪತ್ರವನ್ನು ಸಲ್ಲಿಸತಕ್ಕದ್ದು.

- **ವಿಶೇಷ ಸೂಚನೆಗಳುಃ–**

1. ಅರ್ಜಿಯೊಂದಿಗೆ ಲಗತ್ತಿಸಿರುವ ಎಲ್ಲಾ ಪ್ರಮಾಣ ಪತ್ರಗಳು ಅರ್ಜಿ ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕದೊಳಗೆ ಪಡೆದು ಲಗತ್ತಿಸಿರಬೇಕು. ಇಲ್ಲವೇ ಕೊನೆಯ ದಿನಾಂಕದಂದು ಸಿಂಧುವಾಗಿರಬೇಕು.
2. ಯಾವುದೇ ಅಭ್ಯರ್ಥಿಯು ಸರ್ಕಾರಿ ಃ ಸರ್ಕಾರೇತರ ಅಧಿಕಾರಿಗಳಿಂದ ತನ್ನ ಅಭ್ಯರ್ಥಿಕೆಯ ಬಗ್ಗೆ ಪ್ರಭಾವ ಬೀರಿದಲ್ಲಿ ಅಂತಹ ಅಭ್ಯರ್ಥಿಗಳು ನೇಮಕಾತಿಗೆ ಅರ್ಹರಾಗುವುದಿಲ್ಲ.
3. ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕವು ಸಾರ್ವಜನಿಕ ರಜೆ ಎಂದು ಘೋಷಿಸಿದ ಪಕ್ಷದಲ್ಲಿ ಮುಂದಿನ ಕಚೇರಿ ಕೆಲಸದ ದಿನ ಅರ್ಜಿ ಸಲ್ಲಿಸಲು ಕಡೆಯ ದಿನಾಂಕ ಎಂದು ಪರಿಗಣಿಸಲಾಗುವುದು.
4. ಯಾವುದೇ ಅಭ್ಯರ್ಥಿಗೆ ಸಂದರ್ಶನದ ಬಗ್ಗೆ ಮಾಹಿತಿ ಬರದಿದ್ದರೆ, ಅವರು ಸಂದರ್ಶನಕ್ಕೆ ಅರ್ಹರಲ್ಲ ಎಂದು ತಿಳಿಯತಕ್ಕದ್ದು ಮತ್ತು ಆ ಬಗ್ಗೆ ಯಾವುದೇ ಪತ್ರ ವ್ಯವಹಾರ ಮಾಡಲಾಗುವುದಿಲ್ಲ.
5. ನಿಗದಿಪಡಿಸಿದ ಕೊನೆಯ ದಿನಾಂಕದ ನಂತರ ಬಂದ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.
6. ಅಭ್ಯರ್ಥಿಗಳು ಈ ನೇಮಕಾತಿ ಪ್ರಾಧಿಕಾರ (ಜಿಲ್ಲಾ ನ್ಯಾಯಾಲಯ, ಹಾವೇರಿ) ನಿಗದಿಪಡಿಸಿದ ಅರ್ಜಿ ನಮೂನೆಯಲ್ಲಿಯೇ ಅರ್ಜಿಗಳನ್ನು ಬೆರಳಚ್ಚು ಮಾಡಿದ ಅಥವಾ ಗಣಕಯಂತ್ರದಲ್ಲಿ ಬೆರಳಚ್ಚು ಮಾಡಿದ ಅರ್ಜಿಯನ್ನು ಭರ್ತಿ ಮಾಡಿ ಸಲ್ಲಿಸತಕ್ಕದ್ದು, ಇಲ್ಲವಾದಲ್ಲಿ ಅಂತಹ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

ಸ್ಥಳಃ ಹಾವೇರಿ
ದಿನಾಂಕಃ 06/03/2015

**ವಿ. ಶ್ರೀಶಾನಂದ**
ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಹಾವೇರಿ

## ಅರ್ಜಿ ನಮೂನೆ

| ಸ್ವದೃಢೀಕರಿಸಿದ ಪಾಸ್‌ಪೋಟ್ ಅಳತೆಯ ಭಾವಚಿತ್ರವನ್ನು ಅಂಟಿಸಬೇಕು |
|---|

ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು,
ಹಾವೇರಿ – ಇವರಿಗೆ

ಮಾನ್ಯರೇ,

ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ಅಧಿಸೂಚನೆ ಸಂಖ್ಯೆ: 01/2015 ದಿನಾಂಕ: 06/03/2015 ರ ಪ್ರಕಾರ ನಾನು ಕೆಳಕಂಡ ಮಾಹಿತಿಗಳೊಂದಿಗೆ ಶೀಘ್ರಲಿಪಿಗಾರರ ಹುದ್ದೆಗೆ ಈ ಮೂಲಕ ನನ್ನ ವಿವರಗಳೊಂದಿಗೆ ಅರ್ಜಿ ಸಲ್ಲಿಸುತ್ತಿದ್ದೇನೆ.

| | | | | | | |
|---|---|---|---|---|---|---|
| 01 | ಅಭ್ಯರ್ಥಿಯ ಹೆಸರು (ದಪ್ಪ ಅಕ್ಷರಗಳಲ್ಲಿ) | | | | | |
| 02 | ತಂದೆ / ಗಂಡನ ಹೆಸರು | | | | | |
| 03 | ತಾಯಿಯ ಹೆಸರು | | | | | |
| 04 | ಜನ್ಮ ದಿನಾಂಕ | | | | | |
| 05 | ವಯಸ್ಸು (ಅರ್ಜಿಯನ್ನು ಸ್ವೀಕರಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕದಂದು ಅಭ್ಯರ್ಥಿಯ ವಯಸ್ಸು) | ವರ್ಷಗಳು | ತಿಂಗಳುಗಳು | ದಿನಗಳು | | |
| 06 | ಅಭ್ಯರ್ಥಿಯ ಖಾಯಂ ವಿಳಾಸ ಮತ್ತು ದೂರವಾಣಿ ಸಂಖ್ಯೆ | | | | | |
| 07 | ಲಿಂಗ | ಪುರುಷ / ಮಹಿಳೆ | | | | |
| 08 | ರಾಷ್ಟ್ರೀಯತೆ ಮತ್ತು ಧರ್ಮ | | | | | |
| 09 | ಜಾತಿ / ಉಪಜಾತಿ | | | | | |
| 10 | ವಿವಾಹಿತರಾದಲ್ಲಿ ಒಬ್ಬರಿಗಿಂತ ಹೆಚ್ಚು ಜೀವಂತ ಗಂಡ ಅಥವಾ ಹೆಂಡತಿ ಇದ್ದಾರೆಯೆ? | | | | | |
| 11 | ನೀವು ಯಾವುದಾದರೂ ಕ್ರಿಮಿನಲ್ ಮೊಕದ್ದಮೆಯಲ್ಲಿ ಭಾಗಿಯಾಗಿದ್ದೀರೋ? | | | | | |
| 12 | ನೀವು ಸರ್ಕಾರಿ ಸೇವೆಯಿಂದ ಅಥವಾ ಇನ್ನಾವುದಾದರೂ ಸೇವೆಯಿಂದ ವಜಾ ಆಗಿದ್ದೀರ ಅಥವಾ ತೆಗೆದುಹಾಕಲ್ಪಟ್ಟಿದ್ದೀರಾ? | | | | | |
| 13 | ನೀವು ಪ್ರಸ್ತುತ ಸರ್ಕಾರಿ ಸೇವೆಯಲ್ಲಿರುವಿರಾ? (ಸರ್ಕಾರಿ ಸೇವೆಯಲ್ಲಿದ್ದಲ್ಲಿ, ನೇಮಕಾತಿ ಪ್ರಾಧಿಕಾರದಿಂದ ಪಡೆದ ನಿರಾಕ್ಷೇಪಣಾ ಪತ್ರದ ಪ್ರತಿಯನ್ನು ಕಡ್ಡಾಯವಾಗಿ ಲಗತ್ತಿಸಬೇಕು) | ಹೌದು ( ) | ಇಲ್ಲ ( ) | | | |
| 14 | ಕೋರುವ ಮೀಸಲಾತಿಗಳು (ಕೋರುವ ಮೀಸಲಾತಿಯನ್ನು ✔ ಚಿಹ್ನೆ ಹಾಕುವುದರ ಮೂಲಕ ಗುರುತಿಸಿ ಪ್ರಮಾಣಪತ್ರದ ಸ್ವಯಂ ದೃಢೀಕೃತ ನಕಲನ್ನು ಲಗತ್ತಿಸಬೇಕು) | ಸಾಮಾನ್ಯ | ಪ್ರ. ಜಾತಿ | ಪ್ರ.ಪಂಗಡ | ಪ್ರವರ್ಗ–1 | |
| | | | | | | |
| | | 2–ಎ | 2–ಬಿ | 3–ಎ | 3–ಬಿ | |
| | | | | | | |
| 15 | ನೀವು ಈ ಯಾವುದಾದರೂ ಮೀಸಲಾತಿ ಅಡಿಯಲ್ಲಿ ಬರುತ್ತೀರ? (ಸೇರುವ ಮೀಸಲಾತಿಯನ್ನು ✔ ಚಿಹ್ನೆ ಹಾಕುವುದರ ಮೂಲಕ ಗುರುತಿಸಿ ಪ್ರಮಾಣಪತ್ರದ ಸ್ವಯಂ ದೃಢೀಕೃತ ನಕಲನ್ನು ಲಗತ್ತಿಸಬೇಕು) | ಗ್ರಾಮೀಣ | ಕ.ಮಾ.ಅ | ಮಾ.ಸೈ | ಅಂ. ಅ | ಯೋ.ನಿ.ಅ |
| | | | | | | |
| 16 | ಶೈಕ್ಷಣಿಕ ವಿದ್ಯಾರ್ಹತೆ (ಸ್ವಯಂ ದೃಢೀಕೃತ ಪ್ರಮಾಣ ಪತ್ರಗಳನ್ನು ಸಲ್ಲಿಸತಕ್ಕದ್ದು) | ಉತ್ತೀರ್ಣ ಹೊಂದಿದ ವರ್ಷ | ಗರಿಷ್ಠ ಅಂಕಗಳು | ಗಳಿಸಿದ ಅಂಕಗಳು | ಶೇಕಡಾವಾರು ಅಂಕಗಳು | |
| | ಎಸ್‌ಎಸ್‌ಎಲ್‌ಸಿ | | | | | |
| | ಕನ್ನಡ ಬೆರಳಚ್ಚು (ಕಿರಿಯ ಶ್ರೇಣಿ) | | | | | |
| | ಆಂಗ್ಲ ಬೆರಳಚ್ಚು (ಕಿರಿಯ ಶ್ರೇಣಿ) | | | | | |
| | ಕನ್ನಡ ಬೆರಳಚ್ಚು (ಹಿರಿಯ ಶ್ರೇಣಿ) | | | | | |

| | | | | | |
|---|---|---|---|---|---|
| | ಆಂಗ್ಲ ಬೆರಳಚ್ಚು (ಹಿರಿಯ ಶ್ರೇಣಿ) | | | | |
| | ಕನ್ನಡ ಶೀಘ್ರಲಿಪಿ (ಹಿರಿಯ ಶ್ರೇಣಿ) | | | | |
| | ಆಂಗ್ಲ ಶೀಘ್ರಲಿಪಿ (ಹಿರಿಯ ಶ್ರೇಣೀ) | | | | |

**ಸೂಚನೆಃ** ಅಭ್ಯರ್ಥಿಗಳು ಎಲ್ಲಾ ಕಾಲಂಗಳನ್ನು ಖಡ್ಡಾಯವಾಗಿ ಭರ್ತಿ ಮಾಡತಕ್ಕದ್ದು.

ಈ ಮೇಲೆ ನಮೂದಿಸಿರುವ ಮಾಹಿತಿ ಮತ್ತು ವಿವರಗಳು ಸತ್ಯವಾಗಿದ್ದು ಒಂದು ವೇಳೆ ಅವು ಅಸತ್ಯವೆಂದು ಕಂಡು ಬಂದಲ್ಲಿ ತಾವು ತೆಗೆದುಕೊಳ್ಳುವ ತೀರ್ಮಾನಗಳಿಗೆ ಬದ್ಧನಾಗಿರುತ್ತೇನೆ / ಬದ್ಧಳಾಗಿರುತ್ತೇನೆ.

ಸ್ಥಳಃ ಅಭ್ಯರ್ಥಿಯ ಸಹಿ

ದಿನಾಂಕಃ

**PR. 97**
**SC. 10**

ವಿ. ಶ್ರೀಶಾನಂದ
ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಹಾವೇರಿ

**ನಮೂನೆ–1**

**(9ನೇ ನಿಯಮ ನೋಡಿ)**

**ಜಿಲ್ಲಾ ಪೊಲೀಸ್ ಕಾರ್ಯಾಲಯ, ಗದಗ**

**ಅಧಿಸೂಚನೆ ದಿನಾಂಕ: 19–01–2015**

**ಪೊಲೀಸ್ ಇಲಾಖೆಯ ಗದಗ ಜಿಲ್ಲಾ ಪೊಲೀಸ್, ಗದಗ ಶಹರ ಪೊಲೀಸ್ ಠಾಣೆಯಲ್ಲಿ ನಾಗರಿಕ ಪೊಲೀಸ್ ಪೇದೆ, ಮೆಟಲ್ ಸಂ.– 364 ಹುದ್ದೆಯಲ್ಲಿ ಕೆಲಸ ಮಾಡುತ್ತಿರುವ ಶ್ರೀ ಕೋಟೆಪ್ಪ ತಂದೆ ಗುಡ್ಡಪ್ಪ ಹಾರಕನಾಳು** ರವರಿಗೆ ಅವರ ಹೆಸರನ್ನು " **ಕೋಟೆಪ್ಪ ತಂದೆ ಗುಡ್ಡಪ್ಪ ಒಡೆಯರ**" ಎಂದು ಬದಲಾಯಿಸಿಕೊಳ್ಳಲು ಅನುಮತಿ ನೀಡಲಾಗಿದೆ.

**PD C/n 01**
**SC- 10**

**ಜಿಲ್ಲಾ ಪೊಲೀಸ್ ಅಧಿಕಾರಿಗಳು,**
**ಗದಗ**

**FORM-I**

**(See Rule 9)**

**DEPARTMENT OF POLICE**

**Office of the Commandant II nd Bn, K.S.R.P.Belagavi**

**NOTIFICATION Dated : 08-12-2014.**

Shri. **IRAPPA SHEKHARAPPA. HADAPAD** Working as POLICE CONSTABLE in the Office of the Commandant II nd Bn, K.S.R.P.Belagavi is permitted to change his name to **IRAPPA SHEKHARAPPA. BHAGAVATI.**

**PD-C/N-02**
**SC-10**

**Commandant,**
II nd Bn, K.S.R.P.Belagavi -18

**ನಮೂನೆ–1**

**(9ನೇ ನಿಯಮ ನೋಡಿ)**

**ಉಪ ನಿರ್ದೇಶಕರ ಕಾರ್ಯಾಲಯ, ಸಾರ್ವಜನಿಕ ಶಿಕ್ಷಣ ಇಲಾಖೆ, ಬಾಗಲಕೋಟ**

**ಅಧಿಸೂಚನೆ ದಿನಾಂಕ: 17–01–2015**

**ಸಾರ್ವಜನಿಕ ಶಿಕ್ಷಣ ಇಲಾಖೆಯ ಸರಕಾರಿ ಕಿರಿಯ ಪ್ರಾಥಮಿಕ ಶಾಲೆ, ನಂ.4, ಬಾಸಲಟ್ಟಿ ತೋಟ ಮುಗಳಖೋಡ, ತಾ: ಮುಧೋಳ, ಜಿ: ಬಾಗಲಕೋಟ ಇಲ್ಲಿ ಸಹ ಶಿಕ್ಷಕರಾಗಿ ಕೆಲಸ ಮಾಡುತ್ತಿರುವ ಶ್ರೀ ಸುಭಾಸಚಂದ್ರ ಭೀಮಪ್ಪ ಹರಿಜನ** ಇವರ ಹೆಸರನ್ನು " **ಸುಭಾಸಚಂದ್ರ ಭೀಮಪ್ಪ ದೊಡಮನಿ**" ಎಂದು ಬದಲಾಯಿಸಿಕೊಳ್ಳಲು ಅನುಮತಿ ನೀಡಲಾಗಿದೆ.

**PD C/n 03**
**SC- 10**

**ಉಪ ನಿರ್ದೇಶಕರು, (ಆಡಳಿತ)**
**ಸಾರ್ವಜನಿಕ ಶಿಕ್ಷಣ ಇಲಾಖೆ, ಬಾಗಲಕೋಟ**

**IN THE COURT OF THE CITY CIVIL JUDGE AT BENGALURU.(CCH 21)**

**P & S C No.25012/2014**

**Hg: 25-4-2015**

In the matter of Indian Succession Act XXXIX of 1925 and
In the matter of the property and credits of Mr. S. P. Veerabhadra Setty, intestate deceased

**Between:**

1. S. G. Suresh Babu,
   Aged about 58 years, Son of the late S.V. Gopala Setty, Residing at. No. B-3, Casa Lavelle III, No. 12/2 Lavelle Road, Bangalore - 560001
2. S.R. Devadatha Kumar,
   Aged about 57 years, Son of the late S.V. Ranganath,
   Residing at No. 16/36, Vasanthnagar West, Bangalore - 560 052. **.... PETITIONERS**

**Vs.**

1. Sri. Sharat Shivapuja Chandra,
   Aged about 71 years, Son of Late S V Govinda Setty
   Residing at No. 299, Orange Lake Drive, Bloomfield Hills, Michigan 48302, USA.
2. Sri. Nandakumar G. Shiivapuja,
   Aged about 55 years, Son of Late S V Govinda Setty
   Residing at BUNo.18, SUBK Vipassana Village, Dhamma Giri, Igatpuri - 422403, Dist. Nashik, M
3. Sri. Prasanna Kumar Shivapuja,
   Aged about 54 years, Son of Late S V Govinda Setty
   Residing at No. 34452, Jefferson Ave., Unit 30, Building C, Harrison TWP, Michigan 48035, USA.
4. Smt. Yellamma S.,
   Aged about 80 years, Wife of Late S. V. Gopal Setty,
   Residing at No.15, 4th Block, Kumara Park West, Bangalore 560020.
5. Sri. S. G. Ramakumar,
   Aged about 62 years, Son of Late S. V. Gopal Setty,
   Residing at No.70/19, 8th Main, 8th Cross, Rajmahal Vilas Extension, Sadashivnagar, Bangalore - 560 050
6. Sri. S. G. Srinivas,
   Aged about 60 years, Son of Late S. V. Gopal Setty,
   Residing at No.15, 4th Block, 5th Cross, 3rd Main, Kumarapark West, Bangalore - 560 020.
7. Sri. S.G. Ajith,
   Aged about 48 years, Son of the Late S.V. Gopal Setty,
   Residing at No. 15, 4th Block, Kumara Park West, Bangalore 560020.
8. Smt. Chandrakshmi,
   Aged about 77 years, Wife of the Late S. V. Ranganath,
   Residing at No. 16/36, 1st Cross, Vasanthnagar West, Bangalore 560 052.
9. Sri. S.K. Ramprasad,
   Aged about 70 years, Son of the Late Mandaravalli Ram,
   Residing at Srikanteshwara Layout, Crescent Road, High Grounds, Bangalore 560008.
10. Sri. S.K. Ramadhyani,
    Aged about 67 years, Son of the Late Mandaravalli Ram,
    Residing at No.3009/2, 'Shrirama', 2nd Main Road, 18th 'A' Cross, Banashankari I Stage, Bangalore 560 070.
11. Smt. Jayalakshmi Kuppa Raj,
    Aged about 65 years, Daughter of the Late Mandaravalli Ram,
    Residing at No. 6-G, Arunachalam Road, Nawab Garden, Kotturpuram, Chennai - 600 085.
12. Smt. S.V. Sumitra,
    Aged about 69 years, Wife of the Late S.V. Vishwanath,
    Residing at No. 14/A, 2nd Main Road, 8th Cross, Yadavagiri Industrial area, Mysore - 570020.
13. Sri. S.V. Sridhar,
    Aged about 50 years,
    Son of the late S.V. Vishwanath,
    Residing at No. 14/A, 2nd Main Road, 8th Cross, Yadavagiri Industrial area, Mysore - 570020.
14. Sri. M.V. Nagaraja,
    Aged about 61 years, Son of the Late M.V. Ramalakshmamma,
    Residing at No. 16, 1st Floor, Vasu Sannidhya, Between 7th and 8th Cross, 8th Main Road, Malleshwaram, Bangalore 560003.
15. Smt. M. V. Sarojamma,
    Aged about 57 years, Daughter of the Late M.V. Ramalakshmamma,
    Residing at Flat No 2, Ground Floor, Cocoon Apts, No49,16th Cross, 6th Main, Malleshwaram, Bangalore 560055
16. Smt. Sujatha Jagadeesh,
    Aged 63 years, Wife of the Late S.V. Jagadeesh,
    Residing at No. 25/2, North Public Square, Basavanagudi, Bangalore 560 004.
17. Smt. Bindu Jagadeesh Shivapuja,
    Aged 35 years, Daughter of the Late S.V. Jagadeesh,
    Residing at No. 25/2, North Public Square, Basavanagudi, Bangalore 560 004.
18. Smt. Chaitra Jagadeesh Shivapuja
    Aged 31 years, Daughter of the Late S.V. Jagadeesh,
    Residing at No. 25/2, North Public Square, Basavanagudi, Bangalore 560 004. **.... RESPONDENTS**

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment WPP No. 297



**PUBLIC NOTICE**

Whereas, the petitioners above named have made an application under S.278 of the Indian Succession Act, for grant of Letters of Administration to the property and credits of the late Mr. S. P. Veerabhadra Setty, intestate deceased, resident of No.15, 4th Block, Kumara Park West, Bangalore - 560 020,.

Be it known that no caveat has been entered. That the said petition is posted for hearing on the 25th day of April 2015 and all persons claiming to have any interest in the estate of the deceased may come and see the proceedings before the grant of Probate or Letter of Administration.

Given under my hand and seal of this Court, this 19th day of March 2015.

**P.D. 01** **Sheristedar,**
**SC-5** City Civil & Sessions Court, Mayohall Unit, Bengaluru.

## IN THE COURT OF THE CITY CIVIL JUDGE AT BENGALURU (CCH21)
### P &S C No.25021/2014

**Hg: 25-4-2015**

In the matter of Indian Succession Act XXXIX of 1925 and in the matter of the property and credits of **Mrs. BERNADETTE GEORGE PALLIVATHUKAL,** also known as **Mrs. BERNADETTE GEORGE -** intestate and deceased.

**Between:**

1. Mr. George Abraham Pallivathukkal ,
Aged about 62 years, S/o. late Mr. Abraham,
Residing at No.5/1, Kemp Road, Cleveland Town, Bangalore - 560 005.
2. Mr. Avran George,
Aged about 33 years, S/o Mr. George Abraham,
Residing at No.5/1, Kemp Road, Cleveland Town, Bangalore - 560 005.
3. Mr. Paul George,
Aged about 32 years, S/o. Mr. George Abraham,
Residing at No.5/1, Kemp Road, Cleveland Town, Bangalore - 560 005.
4. Ms. Theja George,
Aged about 30 years, D/o. Mr. George Abraham,
Residing at No.5/1, Kemp Road, Cleveland Town, Bangalore - 560 005.
5. Ms. Anil George,
Aged about 25 years, D/o. Mr. George Abraham,
Residing at No.5/1, Kemp Road, Cleveland Town, Bangalore - 560 005.

**... PETITIONERS**

**AND**

**NIL** **... RESPONDENTS**

**PUBLIC NOTICE**

Whereas, the petitioners above named have made an application for grant of Letters of Administration to the property and credits of the late **Mrs. BERNADETTE GEORGE PALLIVATHUKAL,** also known as **Mrs. BERNADETTE GEORGE,** resident of No.5/1, Kemp Road, Cleveland Town, Bangalore - 560 005.

Be it known that no caveat has been entered. That the said petition is posted for hearing on the 25th day of April 2015 and all persons claiming to have any interest in the estate of the deceased may come and see the proceedings before the grant of Probate or Letter of Administration.

Given under my hand and seal of this Court, this 13th day of March 2015.

K.T.Sebastian,

Advocate,

No.4, Lazar Road, Frazer Town,

Bangalore-5.

**P.D. 02** **Sheristedar,**
**SC-5** City Civil & Sessions Court, Mayohall Unit, Bengaluru.

ಮುದ್ರಕರು ಹಾಗೂ ಪ್ರಕಾಶಕರು:– ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59